# KARNATAKA RAGHUVAMSHA KAVYA



# ಕರ್ನಾಟಕ ರಘುವಂಶ ಕಾವ್ಯ

## ಪ್ರಥಮಸರ್ಗವು

ಶ್ರೀಮನ್ಮಹಾರಾಜರವರ ಆಸ್ಥಾನ ಕವಿಗಳಾಗಿದ್ದ
ಬಸವಪ್ಪಶಾಸ್ತ್ರಿಗಳ ಮಕ್ಕಳು
**ಮಹದೇವಶಾಸ್ತ್ರಿಗಳಿಂದ**
ಪ[illegible]ವಿರಚಿತವಾದುದು.
ವರಂ[illegible]

ಮೈಸೂರು:
ಶ್ರೀನಿವಾಸ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು
1920
ಕ್ರಯ ೪ ಆಣೆ

# ಶ್ರೀಮತ್ಕೃಷ್ಣರಾಜ ನವರತ್ನಮಾಲಾ.

ವೃತ್ತ ॥ ಶ್ರೀಯದುರಾಜವಂಶಮುಕರಾಕರವರ್ಧನ
ರ್ಚಂದ್ರನಾ । ನ್ಯಾಯವಿಚಾರಶಾಲಿ ನಯವಾಕ್ಯ
ರದನತ್ಯಪೂರ್ವಶೋ ॥ ಭಾಯುತಮಂಜುಳಾಂಗನ
ರೀಶಸಮಾನ ನನೂನದಾನ ರಾ । ಧೇಯನೆನಲ್ ನೆಗ
ರ್ದೆದಂ ಸುಜನಾವನಕೃಷ್ಣಭೂಮಿಪಂ ॥ ೧ ॥

ಭೂವಳಯಪ್ರಸಿದ್ಧಜನಪಂ ಗಡ ನಾಲ್ವಡಿ ಕೃಷ್ಣರಾಜ
ಜ್ಜೀವಿತಧರ್ಮನುಂ ಧವಳಕೀರ್ತಿಮರೀಚಿಸುಧಾಭಿಚ
ರ್ತಾ ॥ ಶಾವಳಿಯುಂ ಸತೀಷ್ಟಸುರಭೂಜಸಮೇಯವಿ
ೀದನಾತ್ತದೀ । ನಾವನಕೋವಿದಂ ನಯವಿದಂ ಸುಖ
ಸಫಲೀಕೃತಾಶಯಂ ॥ ೨ ॥

ಪರಿಶುದ್ಧಂ ಯದುವಂಶರತ್ನಕಲಶಂ ಕರ್ಣಾಟಪೃಥ್ವೀ
ರಂ । ಪರಮಾನಂದಮಯಂ ನಿಜಾಶ್ರಿತಜಯಾಭೀತಿ
ದಾನಾದರಂ ॥ ಬಿರುದೆಂತೆಂಬರಗಂಡನಾದೃತಬುಧಂ
ೀಕಂಠಚಾಮುಂಡಿಕಾ । ಕರುಣಾಪಾಂಗಸುಧಾಭಿವರ್ಧಿ
ಸುಖಂ ಶ್ರೀಕೃಷ್ಣಭೂಪಾಲಕಂ ॥ ೩ ॥

ಮಣಿಪೀಠಾಸೀನಮುದ್ಯತ್ಸಚಿವಚಯಸಮಾಸೇವ್ಯಮಾ
ಲಸದ್ಭೂ । ಷಣಕಾಂತಿಪ್ರೋಜ್ವಳಾಂಗಂ ಸುಕವಿಜ
ಮನೋಮಾನಸೋದ್ದಾಮಹಂಸಂ ॥ ಗುಣಭಾಸ್ವದ್ರ
ರತ್ನಾಕರನಿಧಿ ಕಬಲಂ ಸ್ಮೇರವಕ್ತ್ರಂ ಸುಧೀರಾ ।
ಣಿಧಾತ್ರೀಶಾವತಂಸಂ ವಿಜಯಿಸುಗೆ ಕಲಾಕೋವಿದಂ
ಪ ರಾಜಂ ॥ ೪ ॥

ಪರಮಸೌಖ್ಯಪೂರ್ಣವಂ ಪರಹಿತಂ ಪರಿಪೂರ್ಣಮನೋ
ರಥಂ ಪರಾ | ಪರಮೇಶಪಾದಭಜನಾದರನಾರ್ಯಮ
ಸ್ಮರೋಜ್ಜಭಾ ॥ ಸ್ಮರನತುಲಾಮೃತೋಪಮವಚಂಮ
ದುಳಲಿಂಗವಿಭಾಸಿ ಸೌಖ್ಯಬಂ | ಧುರಮಹಿಶೂರದೇಶದ
ಯುಂ ಸೊಗಮಿರ್ಕೆಮ ಕೃಷ್ಣಭೂವಿಪಂ ॥ ೪

ವರಗುಣಧಾಮ ರೂಪಜಿತಕಾಮ ಸದಾಶಿವಭಕ್ತಿಸಿ
ಮ ದು ರ್ಧರಪರಭೀವ ಭೂವಲಲಾಮ ಸಮಸ್ತ
ಳಾಭಿರಾಮ ಭಾ ॥ ಸುರತರದಿವ್ಯನಾಮ ಯದುವಂಶಸ
ಧಾರ್ಣವಸೋಮ ಕೃಷ್ಣಭೂ | ವರ ಪೊರೆ ದಾನಕೂ
ಧರೆಯುಂ ಮಹಿಮಾಕರ ಸೌಖ್ಯಸಾಗರಾ ॥ ೫

ಸ್ಥಿರಭಾಷಂ ಸತ್ಯಭಾವೋದ್ಧರಣನೆನಿಪಭಾಸ್ವತ್ಪ
ಶಸ್ತಿಪ್ರಭೂಷಂ | ಅರಿರಾಜಧ್ವಾಂತಸೂರ್ಯಂ ಪ್ರಣ
ಜನಮನೋಭೀಷ್ಟದಾನೈಕಧುರ್ಯಂ ॥ ನರಪಾಲಂ ವೈ
ಶಾಲಂ ಶಮಧನಜನಲೋಲಂ ಸದಾಸತ್ಯಶೀಲಂ | ಚೆ
ಕಾಲಂ ಶಿಷ್ಟಶೀಲಂ ಸಲಹುಗೆ ಧರೆಯುಂ ಕೃಷ್ಣರಾಜೇ
ದ್ರಚಂದ್ರಂ ॥ ೬

ಕಂದ ॥ ಸಕಳಾರ್ಥಿಮನೋರಥದಾ |
ಯಕಂ ಲಸತ್ಕೀರ್ತಿಕಾಂತನತುಲೌದಾರ್ಯಂ ॥
ಸುಕರಂ ಕೃಷ್ಣಕ್ಷಿತಿಪಾ |
ಲಕನಿರೆ ಕಲ್ಪಾವನೀಜದಿಂದೆಮಗಿನ್ನೇಂ ॥ ೭

ವರಕೃಷ್ಣಕ್ಷಿತಿಪಾಲಶೇಖರನುದಾರಂ ದೀನರಕ್ಷಾ
ರಂ | ಪರಮೋದಾರಗುಣಾನ್ವಿತಂ ಯುವನೃಪಂ ಕಂ
ನವಾಖ್ಯೋಜ್ಜ್ವಲಂ ॥ ಕರುಣಾವಾರಿಧಿ ರಾಜತಂತ್ರಕ
ಲಂ ಕಾಂತಾಖ್ಯಮಂತ್ರೀಶ್ವರಂ | ಪರಮಾನಂದದೆ
ಯೆ ಶಂಭುವಿನರಂ ಚಂದ್ರಾರ್ಕರಿರ್ಪನ್ನೆಗಂ ॥ ೮

ಪ್ರಭುವರಚಾಮಭೂಮಿಪಸಭಾಸುಕವೀಂದ್ರನೆನಲ್
ಪ್ರಸಿದ್ಧಿವೆ । ತ್ತಭಿನವಕಾಳಿದಾಸನಿವನೆಂಬನೆಗಳ್ತೆಯನಾ
ವೀಂದ್ರರಾ ॥ ಸಭೆಯೊಳೆತಾಳ್ದಮತ್ತಿತ್ರ ಮಹಾವಿದುಷಂ
ಸವಪ್ರಶಾಸ್ತ್ರಕೇಳಿ । ವಿಭು ಕಳೆದಂಗಡಾತನಸುತಂ
ಚಿಸಿರ್ಪಸಿದಂ ಕೃಪೇಕ್ಷೆಯಿಂ ॥ ೧೦ ॥

ಶ್ರೀ ಮಹಾಪ್ರಭು ಕೃಪಾಪೋಷಿತ,

ಬಿ. ಮಹದೇವಶಾಸ್ತ್ರಿ.



ಸತ್ಕೃತಿಸಂಸ್ಕೃತದಿಂದೆ ಜ |
ಗತ್ಕೌತುಕವಾಯ್ತು ಕಾಳಿದಾಸನಿನೀಗಳ್ ||
ತತ್ಕೃತಿ ಕರ್ಣಾಟದೊಳ್ ಚ |
ಮತ್ಕೃತಿಯಂ ಬೀರಿ ಮೆರೆಯದಿರ್ಕುಮೆ ಜಗದೊಳ್ ||೫

ಪ್ರಥಮಸರ್ಗ.

# ದಿಲೀಪಚರಿತ್ರಪ್ರಾರಂಭವು

ವಾಗರ್ಥಂಗಳವೋಲ್ಸಂ |
ಯೋಗಂಬಡೆದಿರ್ಪ ಲೋಕಜನನೀಜನಕರ್ ||
ಶ್ರೀಗೌರೀಪರಮೇಶರ |
ವಾಗರ್ಥಜ್ಞಾನಕೀಗಳೆನಗಭಿವಂದ್ಯರ್ ||೧||

ರವಿಭವವಂಶಮದೆತ್ತ |
ಲ್ಪವಿಷಯಮೆನಿಪೆನ್ನಬುದ್ಧಿಕೃತಿಯೆತ್ತ ಮಹಾ ||
ರ್ಣವಮಂ ಪರಿಗೋಲಿಂದಂ |
ಕವಿದಜ್ಞಾನದೊಳೆ ದಾಂಟಲಿಚ್ಛೈಸಿದಪೆಂ ||೨||

ನಗೆಗೆಡೆಯಪ್ಪೆಂ ಕವಿಕೀ |
ರ್ತಿಗೆ ಜಡನಾಂ ಬಯಕೆವೆತ್ತು ನಿಡಿದಂಗಿಳೆಯೊಳ್ ||
ಮಿಗೆ ಸಿಲ್ಕುವಪಣ್ಗೆ ಬಾ |
ಹುಗಳಂ ನೀಡಿರ್ದವಾಮನನ ತೆರದಿಂದಂ ||೩||

ದಾರಂ ಬಜ್ಜರದಿಂ ಕೊರೆ |
ದಾರತುನದೆ ಪುಗುವವೋಲ್ಪುರಾಕವಿಕೃತವಾ ||
ಗ್ದ್ವಾರಮೆನಿಪ್ಪೀವಂಶದೊ |
ಳಾನಯೆ ಮೇಣೆನಗೆ ಸಮನಿಸುಂ ಸಂಚಾರಂ ||೪||

ಅಜಸ್ರಪಾವನವರ್ಗಂ ।
ನಾಜಲರಾಶಿಕ್ಕೆ ತೀರ್ಥವರಕ್ಕಾರಮಾಸ್ಪ ॥
ರಾಜಪದರಥಪಥಪ್ರವಿ ।
ರಾಜಿತರಾವಂಶ್ಯರಾಘಲೋದಯಕರ್ಮರ್ ॥೫॥

ವೃತ್ತಂ॥ ಎರೆದಗ್ಗಿತ್ತಪರಿಚ್ಚೆಗೆಯ್ದುಧನವಂ ಮಾಳ್ಪ
ರ್ಯಥಾಶಾಸ್ತ್ರಮ । ಧ್ವರಮಂ ತಪ್ಪಿಗೆ ತಕ್ಕಶಿಕ್ಷೆಯನೆಗೆ
ಯ್ವಕಾಲದೊಳ್ಜಾಗರೂ ॥ ಕರೆನಿಪ್ಪಕ್ಕಡಲರ್ಥಮಂ
ನೆರಪುವಸ್ತ್ಯಾಂತಾನಕೀಡಾವ ಪೆಂ । ಡಿರನಾಂಬವಿಮ್ಮತ
ಭಾಷಿಗಳ್ದಟಕೆ ಕೀರ್ತ್ಯರ್ಥಂ ಗೆಲಲ್ಕಾಸ್ತ್ರವರ್ ॥೬॥

ಬಿದಿದಪರ್ಬಾಲ್ಯದೆ ವಿಷ ।
ಯಾವರಮತಿಗಳ್ಸ್ಮಯೌವನದೆ ಮುಪ್ಪಿನೆ ಳಾ ॥
ಸಾದಿತಮುನಿಕುಲವರ್ತನ ।
ರಾದಪರಂತದೊಳೆ ಯೋಗದಿಂದೊಡಲಳಿವರ್ ॥೭॥

ಇಂತಪ್ಪರಘುಗಳನ್ವಯ ।
ಮಂ ತನವಾಗ್ವಿಭವಶಾಲಿಯಾದಾನುಸಿರ್ವೆಂ ॥
ಸಂತಂತದು ಣತತಿ ಕಿವಿ ।
ಯಂ ತಾಗುತೆ ಚಾಪಲಕ್ಕೆ ಬೋಧಿಸಿದುದರಿಂ ॥೮॥

ಸಂತಕ್ಕಳ್ಸರೆಕೇಳ್ಪೊಡಿ ।
ದಂ ತಕ್ಕಸ್ಸುಗುಣದೋಷವಿವೇಚತುರರ್ ॥
ಎಂತೆನೆ ಕನಕದ ಶುದ್ಧಿಯು ।
ಮಂತಾಶ್ಯಾಮಿಕೆಯುಮಗ್ನಿಯೊಳ್ಕಾಣ್ಬುದಲಾ ॥೯॥

ಮನುವೈವಸ್ವತನೆಂಬಂ ।
ಮನೀಷಿಗಣಮಾನನೀಯನಿಳೆಯೊಳ್ ಕ್ಷಿತಿಭೃ ॥
ಜ್ಜನದೊಳ್ಮೊದಲಿಗನಾದಂ ।
ಪ್ರಣವಂ ಛಂದಸ್ಸುಗಳ್ಗೆ ಮೊದಲೆನಿಸಿದವೋಲ್ ॥೧೦॥

ಆತನ ಪಾವನಕುಲದೊಳ್ |
ಜಾತಂ ತಾನಾದನಾದಿಲೀಪಾವನಿಪಂ ||
ಪೂತಗುಣಂ ಪಿಂತೆ ಸುಧಾ |
ಸೂತಿ ಪಯೋರಾಶಿಯಲ್ಲಿ ಜನಿಸಿದತೆರದಿಂ ||೧೧||

ಕುಜದೀರ್ಘಂ ವಿಪುಲೋರಸ |
ನಜಿತವೃಷಸ್ಕಂಧನುಂ ಮಹಾಭುಜನಾತಂ ||
ನಿಜಕರ್ಮೋಚಿತದೇಹವ |
ಭಜಿಸಿದುರುಕ್ಷಾತ್ರಧರ್ಮಮೆಂಬವೊಲಿರ್ದ್ದಂ ||೧೨||

ಸಕಲಾಧಿಕಬಲಯುತಮುಂ |
ಸಕಲೋನ್ನತಮುಂ ಸಮಸ್ತತೇಜೋಧಿಕ್ರಾ ||
ರಕಮುಮೆನಿಸಿರ್ಪ್ಪತನುವಿಂ |
ಸಕಲೋರ್ವಿಯನಾಂತು ಮೇರುವಂತೆಸೆದಿರ್ದ್ದಂ ||೧೩||

ಪರಿಜಂಗೆಣೆಯಹಮತಿಯದ |
ಕೆರೆಯಹಶಾಸ್ತ್ರಮುಮದಕ್ಕೆ ತಕ್ಕುದ್ಯಮಮುಂ ||
ನೆರೆಯುದಕೆ ತಕ್ಕ ಫಲಮುಂ |
ಕರಮೆಸೆದತ್ತಾ ದಿಲೀಪ ಧರಣೀಪತಿಯೊಳ್ ||೧೪||

ಬಿಗುರ್ವಡಿಪ ಬಗೆಗೊಳಿಪರಾ |
ಜಗುಣಂಗಳನಾಶ್ರಿತರ್ಗ್ಗನಭಿಭವನೀಯಂ ||
ಸುಗಮಂತಾನೆನಿಸಿರ್ದ್ದಂ |
ನೆಗಳಿಂ ರತ್ನಂಗಳಿಂದೆ ಕಡಲವೊಲಾತಂ ||೧೫||

ವೃತ್ತಂ || ನಿಯಂತೃವಾದಾತನ ನೇಮಿಯಂತೆ ವೃ |
ತ್ತಿಯಾಂತು ಮೀರರ್ಗೆರೆಯೊಂದನಾದೊಡಂ ||
ಭಯಾನ್ವಿತರ್ತ್ತತ್ಪ್ರಜೆಗಳ್ಮನುಕ್ಷಿತಿ |
ಪ್ರಿಯಾದ್ಯರಿಂ ಕ್ಷುಣ್ಣಮೆನಿಪ್ಪಮಾರ್ಗದೊಳ್ ||೧೬||

ಕಂ ಜನರೇಳ್ಗೆಗಾಗಿಯುವರಿಂ |
ಮನುಜೇಂದ್ರಂ ಷಷ್ಠಭಾಗಮಂ ತಾಂ ಕೊಂಡಂ ||
ದಿನಪಂ ಸಹಸ್ರಗುಣಮಾ |
ಗನುಗೊಳಿಸಲ್ಜಲಮನೊಲ್ದು ಸಲೆ ಕೈಕೊಳ್ವಂ ||೧೭||

ಉಪಚಾರಂ ಸೈನ್ಯಂ ತ |
ನ್ನೃಪಂಗೆ ಫಲಸಾಧನಂಗಳೆರಡೇ ನೋಡಲ್ ||
ಉಪಮಾತೀತಂ ಶಾಸ್ತ್ರದ |
ನಿಪುಣತೆಯುಂ ಬಿಲ್ಗೊಳೊಂದುಗೂಡಿದ ಪೆದೆಯುಂ||೧೮||

ಮರೆಯಪ್ಪ ರಾಜಮಂತ್ರಂ |
ನೆರೆ ಗೂಢಂ ತಾನೆನಿಪ್ಪಭಾವಮಿವೆರಡುಂ ||
ನೆರವಾಗಿರೆ ಮೆರೆವುದು ಭೂ |
ವರನುಜ್ಜುಗಮೆಲ್ಲ ಪೂರ್ವವಾಸನೆಗಳವೋಲ್ ||೧೯||

ಬೆದರಿಲ್ಲ ಪೊರೆವನೊಡಲಂ |
ಪುದಿದೊಂದುಂ ರೋಗಮಿಲ್ಲಪುಣ್ಯಮನೆಸಪಂ ||
ಕುದಿವಾಸೆಯಿಲ್ಲ ವರ್ಥಮ |
ನೊದವಿಪನಾಸಕ್ತಿಯಿಲ್ಲ ಸೊಗಮಂ ಕೊಳ್ವಂ ||೨೦||

ತಿಳಿವೊಳ್ಮೌನಂ ಶಾಂತಿಯು |
ಮಳವಿನೊಳುರುದಾನದೊಳಮನುತ್ಸೇಕಂ ಸಂ ||
ಗಳಿಸಿಪ್ಪುರ್ವು ಸುಗುಣಂಗ |
ಳ್ಬೆಳೆಯುತ್ತುಂ ಸೋದರರ್ಕಳಂತಾ ನೃಪನೊಳ್ ||೨೧||

ಎರಗದೆ ದುರ್ವಿಷಯಗಣ |
ಕ್ಕುರುವಿದ್ಯಾಂಬುಧಿಯ ತೀರಮಂ ಕಾಣುತ್ತುಂ ||
ವರಧರ್ಮನಿರತನಹ ಭೂ |
ಜರಂಗೆ ಜರೆಯಿಲ್ಲದೊದವಿದುದು ವೃದ್ಧತ್ವಂ ||೨೨||

ನಯಮಮಂ ಪ್ರಜೆಗಳ್ಗೊಲವಿಂ |
ನಿಯಮಿಸಿ ಕಾವುತ್ತೆ ಪೋಷಿಸುತ್ತಿಪ್ಪುದರಿಂ ||
ಜಯಯುತನಾತನೆ ತಾತಂ |
ಭಯರಹಿತ ಪ್ರಜೆಯ ತಾತರಲೆ ಪೆತ್ತಾತರ್ ||೨೩||

ವೃತ್ತಂ || ಕ್ಷಿತಿಮರ್ಯಾದೆಯ ಪಾಲನಕ್ಕೊಲಿಪಿಸಿಂ
ಶಿಕ್ಷಾರ್ಹರಂ ಶಿಕ್ಷಿಸು | ತ್ತತಿಮಾತ್ರಂ ಪರಿಶುದ್ಧ ಸಂತತಿಗೆ
ವೈವಾಹಕ್ರಮಂದಾಳುತುಂ || ಶ್ರುತಿಮುಖ್ಯಾಖಿಲವಿದ್ಯೆ
ಯೊಳ್ನಿಪುಣನಾದಾ ರಾಜರತ್ನಂಗೆ ವಿ | ಶ್ರುತಕಾಮಾರ್ಥ
ಯುಗಂ ಪರೀಕ್ಷಿಸೆ ವಲಂ ಧರ್ಮಸ್ವರೂಪಾಯ್ತಲಾ ||೨೪||

ಕಂ|| ಕರೆದಂ ಭೂಮಿಯನಾ ಭೂ |
ವರನುರುಯಜ್ಞಕ್ಕೆ ಸಸ್ಯಕೋಸುಗಮಿಂದ್ರಂ ||
ಕರೆದಂ ಸ್ವರ್ಗಮನಿರ್ವರ್ |
ಪರಿಕಿಸೆ ವಿನಿಮಯದಿನುಭಯಭುವನಮನಾಳ್ದರ್ ||೨೫||

ಇಳೆಯರಸುಗಳಾ ರಕ್ಷಕ |
ದಿಳೀಪನುರುಯಶಮನಾನಲಿಲ್ಲಮದೆಂತುಂ ||
ಕಳವೆಂಬುದುಪರವಿತ್ತಂ |
ಗಳತ್ತಣಿಂ ತೊಲಗಿ ಶಬ್ದದೊಳೆ ನಿಲ್ತುದರಿಂ ||೨೬||

ಶಿಷ್ಟಂ ಪಗೆಯಾದೊಡಮಾ |
ವಿಷ್ಟಪಪತಿಗನುಮತಂ ಮಹೌಷಧಮೆನೆ ರು ||
ಕ್ಕೃಣಷ್ಟಂಗೆ ಕೆಳೆಯನಪ್ಪಾ |
ದುಷ್ಟಂ ತ್ಯಾಜ್ಯಂ ಭುಜಂಗದಷ್ಟಾಂಗುಲಿವೋಲ್ ||೨೭||

ಸಾರಮಹಾಭೂತಂಗಳ್ |
ಕಾರಣಸಾಮಗ್ರಿಯಿಂದ ಮೊಸಗಿದನವನಂ ||
ಸಾರಸಭವನದರಿಂ ತ |
ದ್ಧೂರಮಣನ ಗುಣಗಣಂ ಪರಾರ್ಥೈಕಫಲಂ ||೨೮||

ಜಲನಿಧಿತೀರವೆ ಕೋಟೆ ।
ವಲಯಂ ಸಾಗರವೆ ಪರಿಖೆಯೆನೆ ಕಂಗೊಳಿಪಾ ॥
ನೆಲನನದೊಂದೂರೆಂಬೊ ।
ಲ್ಪಲಹಿದನಾನೃಪನನನ್ಯನೃಪಶಾಸನವಂ ॥ ೧೯ ॥

ಆತಂಗೆ ಮಗಧಕುಲಸಂ ।
ಜಾತೆ ಸುದಕ್ಷಿಣೆಯೆನಿಪ್ಪ ಸತಿ ತಾನಿರ್ದಳ್ ॥
ನೂತನದಾಕ್ಷಿಣ್ಯಗುಣೋ ।
ಪೇತೆ ಮಹಾಧ್ವರಕೆ ನೆಗಳ್ದ ದಕ್ಷಿಣೆಯೆಂಬೋಲ್ ॥ ೨೦ ॥

ಪಲರರಸಿಯರಿರ್ದೊಡಮಾ ।
ದಿಲೀಪನೃಪನಚಲಹೃದಯೆಯೆನೆ ನೆಗಳ್ದ ಕೋ ॥
ಮಲೆಯಿಂದಂ ಮೇಣ್ಸಿರಿಯಿಂ ।
ಕಲತ್ರವಂತಂ ಸಮಂತು ತಾನೆಂದರಿದಂ ॥ ೨೧ ॥

ಅನುರೂಪೆಯೆನಿಸಿ ಮೆರೆವಾ ।
ವನಿತಾಮಣಿಯಲ್ಲಿ ಯಾತ್ಮಜನ್ಮೋತ್ಸುಕನಾ ॥
ಜನಪಂ ಕಳೆದಂ ಕಾಲಮ
ನೆನಗೆಂದಿಗೆ ಫಲಿಸುಗುಂ ಮನೋರಥಮೆನುತುಂ ॥ ೨೨ ॥

ಸಂತತಿಸಾಧನವನವಂ ।
ಚಿಂತಿಸಿ ತನ್ನಯ ಭುಜಾಗ್ರದತ್ತಣಿನುರ್ವೀ ॥
ದಂತುರಧರವಂ ಸಚಿವಭು ।
ಜಾಂತರದೊಳಗಿಳಿಪಿದಂ ದಿಲೀಪನೃಪಾಲಂ ॥ ೨೩ ॥

ಬಳಿಕಾದಂಪತಿಗಳ್ನಿ ।
ರ್ಮಳಾಶಯಪುತ್ರವಾಂಛೆಯಿಂದರ್ಚಿಸಿ ಯಾ ॥
ಸಳಿಸಜನಂ ಪೊರಮಟ್ಟರ್ ।
ಕುಲಗುರುವೆನಿಪಾ ವಶಿಷ್ಠನಾಶ್ರಮಕೊಲವಿಂ ॥ ೨೪ ॥

ಸ್ವಮಸೋಽಜಥಸಿದ್ಧಿಯು ಸಂ ।
ತಮೆ ಸೂಚಿಸವಮಾರುತಾನುಕೂಲ್ಯದೆ ತುರಗ ॥
ಕ್ರಮಧೂತರಜೋಽಸ್ಪೃಷ್ಟ ।
ಭ್ರಮರಾಳಕವೇಷ್ಟನಕ್ಕೆಗಳವರುರೆ ಮೆರೆದರ್ ॥೪೧॥

ತಿಳಗೊಳದೊಳ್ದೆರೆಗಳಪೊ ।
ಕ್ಕಳಿಯಿಂ ಕುಳಿರ್ದೆಸೆವ ತಾವರೆಗಳನಿಗಂಪಂ ॥
ಕೊಳುತ್ತೈದಿದರಾದಂಪತಿ ।
ಗಳತ್ಮನಿಶ್ವಾಸಸೌರಭಮನಣಕಿಪುದಂ ॥೪೨॥

ಮುನ್ನಂ ತನ್ನಿಂ ದತ್ತಂ ॥
ಸನ್ನುತಮುಂ ಯೂಪಚಿಹ್ನಮೆನಿಪಾ ಗ್ರಾಮದೊ ॥
ಳುನ್ನತಯುಜ್ವಬ್ಬೆಂದು ಮ ।
ಹೋನ್ನತನಂ ಪರಸಿ ಮುದದಿನರ್ಘ್ಯಮನಿತ್ತರ್ ॥೪೩॥

ತಳೆದು ನವಘೃತವ ಹರವಿಗ ।
ಳೊಳೆ ಮಾರ್ಗದೆ ಬರ್ಪ್ಪಘೋಷವೃದ್ಧರನಾಗಳ್ ॥
ನಲವಿಂ ಬೆಸಗೊಂಡರವರ್ ।
ಸಲೆ ಮಾರ್ಗದ ಶಾಖಿಗಳ ಪೆಸರ್ಗಳನೆಲ್ಲಂ ॥೪೪॥

ಪರಿಶುದ್ಧವೇಷದಿಂದಂ ।
ಕರಮೊಪ್ಪುವ ರಾಜದಂಪತಿಗಳಂದೆಸೆದರ್ ॥
ಉರುಚಿತ್ರಾನಿಮ್ಮ ಕ್ಷತ್ರೆಯಿಂ ।
ಮೆರೆವಾಚಿತ್ರಾಸುಧಾಕರರ್ಕ್ಕಳ ತೇಜದಿಂ ॥೪೫॥

ಆಯಾವಿಶೇಷಮಂ ನಿಜ ।
ಜಾಯೆಗೆ ತೋರುತ್ತುಮರಿದುದಿಲ್ಲಂ ಪಥದಾ ॥
ಆಯುತಿಯುಂ ಪ್ರಿಯದರ್ಶನ ।
ನಾಯುಸಮಿನಿತಿಲ್ಲದವನಿಪಂ ಬುಧಸದೃಶಂ ॥೪೬॥

ಆತಂ ದುರ್ಲಭಕೀರ್ತಿ ।
ವ್ರಾತಂ ಭಾರ್ಯಾಸಮೇತನಾಶ್ರಮಪದಮಂ ॥
ಪ್ರೀತಿಮಿಗೆ ಸಾರ್ದ್ದನಾವಿ ।
ಖ್ಯಾತಂ ಸಂಜೆಯೊಳೆ ಭೂವರಂ ಶ್ರಾಂತಾಶ್ವಂ ॥೪೭॥

ವೃತ್ತಂ ॥ ಅಸವಸದಿಂ ಸಮಿತ್ಕುಶಫಲಂಗಳನಾನುತ್ತೆ
ವೇದಮಂತ್ರಮಂ । ಸಸಿನೆ ಪರಾಯಣಂಗೊಳುತೆ ನಾಡೆ
ವನಾಂತರದತ್ತಣಿಂದಮಾ ॥ ಯುಸಮಿನಿತಿಲ್ಲದಂತು ಮರ
ಳ್ವಂದಿದಿರಾಗೆಯುಪಾಸನಾಗ್ನಿಗಳ್ । ಹಸನಮುಖರ್ಕಳ
ಪ್ಪಮುನಿವರ್ಯರಿನೊಪ್ಪಿದುದಾಗಳಾವನಂ ॥೪೮॥

ಎಲೆವನೆಗಳ ಬಾಗಿಲ್ಗಳ ।
ನೊಲವಿಂ ತಡೆಯುತ್ತೆ ಧಾನ್ಯಭಾಗಮನೊಂದಲ್ ॥
ಚಲಿಸದೆ ಮುನಿಸತಿಯರ ಮ ।
ಕ್ಕಳವೋಲ್ಪುದಿದಿರ್ದ್ದುವಲ್ಲಿ ಪುಲ್ಲೆಗಳಹಹಾ ॥೪೯॥

ರಿಸಿಗನ್ನೆಯರುರೆ ಜಲಮಂ ।
ಸಸಿಗಳ್ಗರದೆರೆದು ಬಳಿಕ ಪಾತೆಯೊಳಿರ್ಪ್ಪ ॥
ಪೊಸನೀರಂ ಖಗಗಳ್ವಿ ।
ಧ್ವಸಮಿಲ್ಲದೆ ಕುಡಿಯಲೆಂದು ದೂರದೊಳಿರ್ದ್ದರ್ ॥೫೦॥

ಬಿಸಿಲಡಗೆ ರಾಸಿಗೊಳಿಸಿದ ।
ಪೊಸಧಾನ್ಯದಿನೆಸೆವ ಪರ್ಣಶಾಲಾಂಗಣದೊಳ್ ॥
ಮಿಸುಕದೆ ಮಂಡಿಸಿ ಮೆಲುಕಂ ।
ಹಸನಾಗಿಯೊಡರ್ಚುತಿರ್ದ್ದುವಲ್ಲಿ ಮೃಗಂಗಳ್ ॥೫೧॥

ಉರಿವಗ್ನಿಯನುರೆಸೂಜಿಸು ।
ತುರೆ ಪವನೋದ್ಧೂತಮಾಗಿಯಾಜ್ಯಾಹುತಿಯಾ ॥
ಪರಿಮಳವನಾಂತಧೂಮಂ ।
ಬರುತಿರ್ಪ್ಪತಿಥಿಗಳ ಶುದ್ಧಿಗೊಳಿಸಿದುದಿದಿರೊಳ್ ॥೫೨॥

ಬಳಿಕಾ ಭೂಪತಿ ಸೂತನ ।
ನೆಳೆ ನೀಂ ಸಂತೈಸು ರಥತುರಂಗಂಗಳನೆಂ ॥
ದೊಲಿವಾಣತಿಯಿತ್ತರಸಿಯು ।
ನಿಳಸಿ ಮಹೋತ್ಸವದೆ ತಾನುಮಿಳಿದಂ ರಥದಿಂ ॥೫೩॥

ಪಂಡಿತವರ್ಯಮೃರ್ತ್ತಿಂ ।
ದಂಡಿತಸರ್ವೇಂದ್ರಿಯರ್ಕ್ಕಳೆನಿಪ ಮುನೀಂದ್ರರ್ ॥
ಕೊಂಡಾಡುತೆ ನಯವಿದನಂ ।
ಮಂಡಲಪತಿಯುಂ ಸಭಾರ್ಯನಂ ಪೂಜಿಸಿದರ್ ॥೫೪॥

ವೈಗಿನಕರ್ಮಂಗಳ ನೆರೆ ।
ಸಾಗಿಸಿದಬಳಿಕ್ಕರುಂಧತೀಸಹಿತಂ ತಾ ॥
ನಾಗಿಹ ವಶಿಷ್ಠನಂ ಸ್ವಾ ।
ಹಾಗತವಹ್ನಿಯನೆ ಕಾಬ್ಬವೋಲ್ಕಂಡನವಂ ॥೫೫॥

ಅರಸನುಮರಸಿಯುಮಿರ್ವ್ವರ್ ।
ಗುರುದಂಪತಿವರರ ಚರಣಕಮಲಂಗಳನಾ ॥
ದರದಿಂ ವಂದಿಸಿದರ್ತ್ತ ।
ದ್ಗುರುಗುರುಪತ್ನಿಯರು ಮವರನಭಿನಂದಿಸಿದರ್ ॥೫೬॥

ಅತಿಥಿಕ್ರಿಯಾನಿವರ್ತಿತ ।
ವಿತತಪಥಾಯಾಸನಾದರಾಜರ್ಷಿಯನಾ ॥
ಮತಿಯುತ ಮುನಿಪತಿ ರಾಜ್ಯದೊ ।
ಳತಿಶಯಕುಶಲಮನೆ ಹರಿಸದಿಂ ಬೆಸಗೊಂಡಂ ॥೫೭॥

ಹಗೆಗಳ ಪೊಳಲಂ ಗೆಲ್ದಾ ।
ಜಗತೀಪತಿ ವಾಗ್ಮಿವಲ್ಲಭಂ ನಲವಿಂದಂ ॥
ನಿಗಮಾಗಮವೇದಿಯುಮಂ ।
ದೊಗುಮಿಗೆಯಿಂ ಮಾತನಾಡಲುದ್ಯತನಾದಂ ॥೫೮॥

ನೆರೆ ರಾಜ್ಯಾಂಗಂಗಳೊಳುದು |
ತರಕುಶಲಂ ತಾನದಾವಗಂ ನೆಲಸಿರ್ಕುಂ |
ನರರಿಂ ದೇವರಿನೊದವುವ |
ನಿಖಿಲವಿಧಾಪದವ ನೀನೆ ಪರಿಹರಿಪುದರಿಂ ||೫೯||

ವೃತ್ತಂ || ಕದನಂ ತಾನಿಲ್ಲದೇದುಂ ಮನುಗಣದೊಳತಿ
ಪ್ರಾಭವಂಗೊಂಡ ನಿನ್ನಸ್ತ್ರ ಗಣದ ಮಂತ್ರಂಗಳ ಮಸ್ತ್ರಾರಿಗ
ಳ ಹರಣಮಂ ದೂರದಿಂ ನೀಗುತಿರ್ಕುಂ || ಪ್ರದಹ
ನ್ನಾದಪ್ರದಾ ಯುದ್ಧ ಭುವಿ ಪರಿಕಿಸಲ್ಕೆನ್ನ ಶೌರ್ಯಾದ್ಯಾಯುಧಂ
ಗಳ್ | ಹದದಿಂ ಮುಂದಿಪ್ಪುರ್ಲಕ್ಷ್ಯಂಗಳನೆ ಸರಿಸದೊಳ್ ಭೇ
ದಿಸುತ್ತಿರ್ಕುಮಲ್ತೆ ||೬೦||

ಅಧಿಕಜ್ಞನಾದ ಯಜ್ವನೆ |
ವಿಧಿಯಿಂ ನೀನಗ್ನಿಯಲ್ಲಿ ಪೇಳ್ದಾಹವಿಯೀ ||
ಬುಧರರಿಯೆ ಬರವ ತೋಲಗಿ |
ಪೃಥಿವ್ಯಷ್ಟಿಯದಪ್ಪುದಲ್ತೆ ಸಸಿಗಳ್ಗೆಂದುಂ ||೬೧||

ಪುರುಷಾಯುಷಜೀವಮ್ಮಿರ್ಗೀ |
ಣ್ಣೆರಾಕುಲಸ್ಸರ್ತತ ವಿಪತ್ತಿಬಾಧಾರಹಿತರ್ ||
ನೆರೆ ಮತ್ಪ್ರಜೆಗಳಿವೆಂಬುದ |
ಕುರೆ ನಿನ್ನೀಬ್ರಹ್ಮವರ್ಚಸಮೆ ಬೀಜವಲಾ ||೬೨||

ಚತುರಾನನಸುತನುಂ ಮ |
ತ್ತತುಳಾಚಾರ್ಯನುಮೆನಿಪ್ಪ ನಿನ್ನಿಂದಾಂ ಜಿಂ ||
ತಿತನಾಗಿರೆ ಮತ್ಸಂಪದ |
ದತಿಶಯಕೇಂ ಹಾನಿ ಬಪ್ಪುರ್ದೇ ಮುನಿವರ್ಯಾ ||೬೩||

ಆದೊಡೆ ನಿನ್ನೀಸೊಸೆಯೊ |
ಳ್ಮೊದಂಗುಡುವಾತ್ಮಜಾತನೊಗೆಯದ ಕತದಿಂ |
ಆವಂ ರನ್ನಂಗಳ್ಗೆ ಪೆ |
ಯಾದೆಲ್ಲಾ ಬುವಿಯುನಾಳ್ದೊಡಂ ತಣಿವಿಲ್ಲಂ ||೬೪||

ಬಿಡದಾಂ ಕುಡುವಾಪಿಂಡಮಂ |
ಕಡೆಯೊಂದೆಣಿಸುತ್ತೆ ಚಿಂತೆಯಿಂ ಶ್ರಾದ್ಧದೊಳಾಂ ||
ಕುಡುವುದರೊಳರ್ಧಮಂ ತೆಗೆ
ದಿಡುವರ್ ಪಿತೃಗಳ್ ಮುಂತು ಭೋಜನವೊದಗಲ್ ||೬೫||

ಎನ್ನ ಬಳಿಕ್ಕಂ ದುರ್ಲಭ |
ಮಿನ್ನೆಂದುರೆ ದುಗುಡದಿಂದೆ ಬಿಸುಸುಯ್ತುಸಿರಿಂ ||
ಬನ್ನಂಬಡುತ್ತೆನ್ನಯ ಪಿತ
ರನ್ನೆಯುವರಾಂ ಕುಡುವ ಜಲಮುಮನುಂಟುವರಕಟಾ ||೬೬||



ವರಮಖದಿಂದಂ ಶುದ್ಧಂ |
ನಿರುಪಮಸಂತತಿಯದಿಲ್ಲದುದರಿಂ ಮಲಿನಂ ||
ನಿರುತಂ ತೋರ್ಪೆಂ ಬೆಳಗುಂ |
ನೆರೆ ಕತ್ತಲೆಯುಂ ತಗುಳ್ದ ವೇಲಾಚಲದೋಲ್ ||೬೭||

ವೃತ್ತಂ ‖ ತಪದಿಂ ದಾನಂಗಳಿಂದುದ್ಭವಿಸಿದ ಸುಕೃತಂ ನೋಡೆ ಲೋಕಾಂತರಕ್ಕಾ | ದಪುದುದ್ಯತ್ಸೌಖ್ಯಸಂಪಾದಕನನುಳನಪ್ಪಾರಿತ್ರ ಸುಶುದ್ಧವಂಶ್ಯಂ | ಕುಪಿತೋಗ್ರಾರ್ಕಾತ್ಮಜಾತ್ಯುಗ್ರಹಠಮುಸಕಲಂ ತಾನೆನಿಪ್ಪಾತ್ಮಜಾತಂ | ಕೃಪೆಯಿಂ ಕೇಳ್ವೈಹಿಕಾಮುಷ್ಮಿಕ ಸುಖಜನಕಂ ಶಾಸ್ತ್ರ
ಸಿದ್ಧಂ ಜಿತಾತ್ಮಾ ||೬೮||

ಗುರುವೇ ನೀಂ ಪ್ರೇಮದಿಂದಾಶ್ರಮದ ಸಸಿಗೆ ನೀರ್ವೊಯ್ದು ಸಂವರ್ಧನಂಗೈ | ದಿರೆ ತಾಂ ಪೂತೊಪ್ಪಿಯುಂ ಮೋಹನಾಚಿತಸಮಯದೊಳ್ಪಣ್ಗಳಂ ತಾಳ್ದದಿಲ್ಲೆಂ | ದರಿದಾಗಳ್ಬೇವಸಂಗೊಳ್ವವೊಲೆ ಸಮೃದ್ಧಿಕ್ಯೈಶ್ವರ್ಯಸಂಪನ್ನನಾನಾ | ಗಿರೆಯುಂ ಸಂತಾನಶೂನ್ಯತ್ವಮನೆ ತಳೆದಿರಲ್ಬೇವ
ಸಂಗೊಳ್ವೆಯಲ್ತೇ ||೬೯||

ಕಂ ॥ ಮುನಿವರ್ಯನೆ ನೀನಾಲಿಸು ॥
ಕೊನೆರಿಣಮಿದು ಮನಮನೇಗಳುಂ ನೋಯಿಸುಗುಂ ।
ಘನಮಜ್ಞನಮಂ ಪಡೆಯದ ।
ವನಗಜಕಾಲಾನವೊಡಲನುರೆ ನೋಯಿಪವೋಲ್ ॥ ೩೦॥

ಅಯ್ಯನೆ ಆರಿಣದಿಂದಾ ।
ನೊಯ್ಯನೆ ಬಿಡುಗಡೆಯನೊಂದಿ ನಲಿವಂತೆಸಗೈ ।
ರಯ್ಯನೆ ರಘುಜರ ಜಯಕೆಗೆ ।
ಮುಯ್ಯಂದದ ಸಿದ್ಧಿ ನಿನ್ನ ಕೈಬಸವಲ್ತೇ ॥ ೩೧॥

ಇಳೆಯಾಣ್ಮನಿಂತು ಮಾನಸ ।
ದಳಲಂ ಬಿನ್ನವಿಸೆ ಮುನಿಪನದನಾಲಿಸಿ ತ ॥
ನ್ನೊಳಗರಿಯಲ್ ಜಾನಿಸುತುಂ ।
ಕುಳತಂ ನಸುಮಿಸುಕದಿರ್ಪ ಮಡುವಿನತೆರದಿಂ ॥ ೩೨॥

ಇರದೇಕಾಗ್ರಸ್ವಾಂತದೊ ।
ಳರಿಯುತಾತ್ಮಪ್ರಭಾವದಿಂ ಪಿಂತಣದಂ ॥
ವರಮುನಿಪತಿ ಪೇಳ್ದಂ ಭೂ ।
ವರನೊಳೆ ಸಂತತಿವಿನಾಶಹೇತುವನೆಲ್ಲಂ. ॥ ೩೩॥

ನರಪತಿ! ಪಿಂತೊಲವಿಂ ನೀಂ ।
ಸುರಪನನೋಲಗಿಸಿ ತಿರುಗಿಬಲುಭರದಿಂದಂ ॥
ಧರಣಿಗೆ ಬರ್ಪಾಪಥದೊ ।
ಳ್ಸುರಭಿ ಸುರದ್ರುಮದ ನೆಳಲನಾಶ್ರೈಸಿತ್ತೈ ॥ ೩೪॥

ಧರ್ಮಚ್ಯುತಿಭಯದಿಂ ನೀಂ ।
ಮರ್ಮಜ್ಞಂ ರಾಜ್ಞಿಯಂ ಋತುಸ್ನಾತೆಯುಮಂ ॥
ತರ್ಮನದೆ ನೆನೆದು ತವಕದಿ ।
ನೊರ್ಮೊದಲದಕುಚಿತಸತ್ಕೃತಿಯನುರೆ ಮರೆದೈ ॥ ೩೫॥

ಮುಂದಿರ್ಪ್ರೆನ್ನಂ ನಿಟ್ಟಿಸು ।
ತಿಂದೆನಗವಮತಿಯನೆಸಗಿದ್ದೈ ನೀನದರಿಂ ॥
ಸಂದೆನ್ನ ವಳಿಯ ಭಜಿಸದ ।
ದೆಂದುಂ ನಿನಗಿಲ್ಲ ಮಕ್ಕಳೆಂದುದು ನೃಪತೀ ॥೭೬॥

ವೃ॥ ಶಾಪಮುದೈಸೆ ನಿನ್ನಕಿವಿಗಂ ಸಲೆ ಸಾರಥಿಕರ್ಣ
ಕಂಧರಿ । ಶ್ರೀಪತಿ! ಕೇಳದಾದುದು ಸಮಂತು ದಿಶಾಗಜ
ಪ್ರೋತ್ಕ್ರತಿಸ್ವನೋ ॥ ದ್ದೀಪಿತಪೂತನಿರ್ಜರಸರಿದ್ಗತಭೂ
ರಿತರಂಗಸಂಘವಿ । ಖ್ಯಾಪಿತಘೋರಘೋಷಘನಡಂಬ
ರದಿಂ ವಿಡಂಬಿತಂ ॥೭೭॥

ಕಂ॥ ಸುರಧೇನುವಿನವಮಾನದಿ ।
ನಿರದಾಯಿತ್ತಿನ್ನಭೀಷ್ಟಸಿದ್ಧಿಗೆ ವಿಘ್ನಂ ॥
ಧರಣಿಯೊಳೆ ಪೂಜ್ಯಾಪೂಜಾ ।
ಪರಿಕ್ರಮಾಕ್ರಮಮೆ ಕಿಡಿಸುಗುಂ ಗಡ ಲೇಸಂ ॥೭೮॥

ಆಧೇನು ದೀರ್ಘಕಾಲದೆ ।
ಸಾಧಿಪಯಜ್ಞವನೆ ಮಾಳ್ಪವರುಣಂಗೀಗಳ್ ॥
ಶೋಧಿತಹವಿಗೋಸುಗಮಹಿ ।
ಬಾಧಿತಪಾತಾಳಕುಹರದೊಳ್ವರ್ತಿಸುಗುಂ ॥೭೯॥

ಜಗತೀಪತಿ ಯಾಸುರಭಿಗೆ ।
ಮಗಳಹನಂದಿನಿಯನದಕೆ ಪಡಿಗೆಯ್ಯುತ್ತುಂ ॥
ಮಿಗೆಶುದ್ಧತೆಯಿಂ ಸತಿಯೊಡ ।
ನಗಲದೆ ನೀಂ ಭಜಿಸೆ ಮಚ್ಚಿವಾಂಛೆಯನೀಗುಂ ॥೮೦॥

ಇಂತೆಂದು ಪೇಳ್ವನಿತ್ತರೊ ।
ಳಂತಾನಂದಿನಿ ಮಹರ್ಷಿಹುತಸಾಧನಮ ॥
ತ್ಯಂತಸ್ತುತ್ಯಂ ಭರದೆ ವ ।
ನಾಂತರದಿಂದೊಂದಿತೊಲವಿನಿಂದಾಶ್ರಮಮಂ ॥೮೧॥

ತಳರಂತೆ ಪೊಳೆಯುತುಂ ಪೆಾ ।
ಟಳವರ್ಣಮನಾಂತಧೇನು ಪಣೆಯೊಳ್ಮೊಕಂ ।
ತಳೆದಿಹಬೆಳ್ಪತ್ತಿಯಿನದು ।
ತೊಳಗಿತು ಬಾಲೇಂದುವೆರೆದ ಸಂಜೆಯುತೆರದಿಂ ॥೮೨॥

ವೃ॥ ಈರುವಂ ನೋಳ್ಪುದರಿಂದೆ ಸೀಳ್ದುರ್ವೆಮೊ-
ಣ್ದೀಕ್ಷಾಂತಸುಸ್ನಾನಕಿಂ ಪಿಪಾಸಿತ್ಯಮನಾಂತುಗು
ಬ್ಬಿಸಿಯಿನೊಪ್ಪುತ್ತಿರ್ಪ ಪಾಲ್ದಾರೆಯಿಂ ॥ ಧರೆಯಂ
ನಾಂದ್ರುತೆ ಕುಂಭದಂತೆ ಮೆರೆವಾಬಿಣ್ಗಚ್ಚಲಂ ತಾಳ್ದು
ಬಂ । ಘುರಭೂದೇವತೆಯಂದದಿಂ ಸೊಗಯಿಸಿತ್ತಾಧೇನು
ವಾಕಾಲದೊಳ್ ॥೮೩

ಗೊರಸಿಂ ದೇಳುತೆ ಮೆಯ್ಯಂ ।
ಭರದಿಂ ಸೋಂಕುವ ರಜಃಕಣಂಗಳನದು ತಾಂ ॥
ಧರಣಿಪತಿವೌಳಿಗೊದವಿಸಿ ।
ತುರುತರತೀರ್ಥಾಭಿಷೇಕ ಶುದ್ಧಿಯನಾಗಳ್ ॥೮೪॥

ಶಕುನಜ್ಞನಪ್ಪ ಮುನಿಪತಿ
ಯಕುಟಿಲಮತಿ ಪುಣ್ಯಧೇನುವಂ ನಿಟ್ಟಿಸಿ ಸಾ ।
ಧಕನೃಪನಂ ಸಲೆ ಸಾಧಿಕ ।
ಸಕಲೇಪ್ಸಿತನೆಂದು ತಿಳಿದು ಮತ್ತಿಂತೆಂದಂ ॥೮೫॥

ಧರಣಿಪ । ನಿನ್ನಯ ಕಾರ್ಯಂ ।
ಭರದಿಂ ಸಿದ್ಧಿಸುಗುಮೆಂದು ತಿಳಿ ಸಂದೆಗಮೇಂ ।
ಸುರುಚಿರಮಂಗಳಮಯಮಿಾ ।
ತುರು ಬಂದುದು ತನ್ನಹೆಸರ ನೆರೆವವಸರದೊಳ್ ॥೮೬॥

ವೃ॥ ...ಕಂದಮೂಲಫಲದಾಹಾರಂಗ
...ಂ ಕೊಳ್ವುತುಂ । ...ಸದೊಳ್ ಭಕ್ತಿಯನಾಂತು ಬೆಂಬಿ
...ಡದೆ ನೀಂ ಕಾಪಾಡುತಿನ್ನಿಚ್ಛರಿಂ ॥ ಇನಿಸುಂಬೇಸರವೂ
...ದಂತಿದನೆ ಸಂದೆಂತಾದೊಡಂ ಸೇವಿಸು । ತ್ತನುವಿಂ ವಿದ್ಯೆ
...ಯುನ್ನೈದೆಯಭ್ಯಸನದಿಂ ಮೆಚ್ಚಿಪ್ಪವೋಲ್ಮೆಚ್ಚಿಸೈ ॥೮೭॥

ವೃ॥ ನಡೆದೊಡೀತುರು ಮುಂಗಡೆ ಬಿಂತೆ ನೀಂ ।
ನಡೆಯು ನಿಂದೊಡೆ ನಿಲ್ವುದುಬೇಸರಂ ॥
ಪಡೆದು ಕುಳ್ಳಿರೆ ಕುಳ್ಳಿರು ದಾಹದಿಂ ।
ಕುಡಿದೊಡಂಬುವ ನೀಂ ಕುಡಿಯುಂಬುವಂ ॥೮೮॥

ವೃತ್ತಂ ॥ ಜನಪಾ ! ನಿನ್ನಯ ಭಾರ್ಯೆಯಿಂದು ಮಡಿ
ಯುಟ್ಟೀಧೇನುವಂ ಭಕ್ತಿಯಿಂ । ದನುವಿಂ ಪೊಳ್ತಿಗೆ ಚಿತ್ತ
ಶುದ್ಧಿಯುತೆ ತಾಂ ಗಂಧಾಕ್ಷತಾದ್ಯರ್ಚನಾ ॥ ವಿನುತದ್ರವ್ಯ
ಗಳಿಂದೆ ಪೂಜಿಸಿ ಬಳಿಕ್ಕಂ ದಾಂಟಿಸುತ್ತುಂ ತಪೋ । ವನ
ಮಂ ಸಂಜೆಯೊಳೆಂದಿನಂತೆ ಮುದವೆತ್ತೀರಂತಿದಿಗೊ್ಗ
ಳ್ವುದೈ ॥೮೯॥

ಕಂ ॥ ಇಂತೀಧೇನುವನುಗ್ರಹ ।
ಮಂ ತೋರುವವರೆಗಮೊಲ್ದು ಸೇವಿಸು ನಿಚ್ಚಂ ॥
ಮುಂತೆಡರೆಲ್ಲಂ ತೊಲಗುಗೆ ।
ಯೆಂತುಂ ನೀಂ ಪುತ್ರಗಣದೊಳಗ್ರಣಿಯೆನಿಸೈ ॥೯೦॥

ಸ್ಥಳಕಾಲಂಗಳನರಿತನು ।
ಭುಳಪಿಗನುಂ ಪ್ರೀತಿವಂತನುಂ ಶಿಷ್ಯನುಮ ॥
ಪ್ಪಳಿಯಾಜ್ಞೆನೆರಗಿ ಸತಿವೆರ ।
ಸೆಳಸುತ್ತಂತಾಗಲೆಂದದಂ ಕೈಕೊಂಡಂ ॥೯೧॥

